ಒಂದಾಣೆ ಮಾಲೆ 268

# ಪಟಾಕಿ

ಮತ್ತು

## ಇತರ ಹರಟೆಗಳು



ಲೇಖಕರು:
ದಿ। ಎಮ್.ವಿ.ಪ್ರಭು, ಎಮ್.ಎ., ಎಲ್.ಟಿ., ಮಂಗಳೂರು.





1960

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

(13ನೇ ಪುಟದಿಂದ ಮುಂದುವರಿದುದು)

ಇದಕ್ಕೆ ಜನ್ಮದೋಷವೆಂದು ಹೇಳುವರು. ಅವರು ಜಗತ್ತಿಗಿಳಿದುದೂ ಹಾಗೆಯೇ.

ಕಾಯಿಪಲ್ಯಗಳ ವಿಷಯ ಎರಡು ಮಾತುಗಳನ್ನು ಹೇಳಬೇಕಾಗಿದೆ. ಬಾಳೆಯಗೊನೆಯು ಬಾಳೆಯಿಂದ ಬರುವಾಗ ಕಾಲುಕೆಳಗಾಗಿ ಬಂದರೂ, ಅಂಗಡಿಗಾರರ ಕೈಸೇರಿದೊಡನೆಯೇ ಅದು ತಲೆಕೆಳಗಾಗಿ ಕಾಲುಮೇಲಾಗುವುದು. ಬಾಳೆಯ ಗೊನೆಗೆ ತಲೆ ದೊಡ್ಡದು. ತಲೆಯ ಹತ್ತಿರವಿರುವ ಕಾಯಿಗಳೂ ದೊಡ್ಡ ಗಾತ್ರದವುಗಳು. ಹೀಗಾಗಿ ಕೊಂಡುಕೊಳ್ಳುವವರ ಸೌಕರ್ಯಕ್ಕಾಗಿ ಅಂಗಡಿಗಾರರು, ಅದನ್ನು ತಲೆಕೆಳಗೆ ಮಾಡಿ ಕಾಲು ಮೇಲಾಗಿ ತೂಗಾಡಿಸುವರು.

ಎರಡನೆಯ ಕಾಯಿಪಲ್ಯ ಕೋಳಿ ಹುಂಜಗಳು. ಇವುಗಳನ್ನು ದೊಡ್ಡ ಕೋಲಿಗೆ ತಲೆಕೆಳಗೆ ಕಾಲುಮೇಲಾಗಿ ತೂಗ ಡಿಸಿ ಕೋಳಿ ಸಾಹುಕಾರರು ಮಾರಾಟವನ್ನು ಮಾಡುವರು. ಕೋಳಿಗಳಿಗೆ ತಲೆ ಸಣ್ಣದು. ಕಾಲುಗಳಿಗೆ ಪ್ರಾಧಾನ್ಯವು ಹೆಚ್ಚು. ಹಡಗದಲ್ಲಿ ಪ್ರಯಾಣಮಾಡುವಾಗ ಇಬ್ಬರು ಗೃಹಸ್ಥರು ಈ ಕಾಲುಗಳನ್ನು ಹಿಡಿದು ಬಾಯಿಯಿಂದ ಅವುಗಳ ಮೇಲೆ ಬಹು ರುಚಿಯಿಂದ ಅರ್ಧಗಂಟೆಯ ಕೆಲಸಮಾಡುವುದನ್ನು ನಾವು ನೋಡಿರುತ್ತೇವೆ.

ಗೋಣಿಯ ಚೀಲದಲ್ಲಿ ತುಂಬಿಕೊಂಡು ಬರುವ ಎಳೀ ಕಾಯಿಪಲ್ಯವೆಂದರೆ ಹಂದಿಯ ಮರಿಗಳು. ಇವುಗಳನ್ನು ಪರೀಕ್ಷಿಸುವಾಗ ವ್ಯಾಪಾರಸ್ಥರು ತಲೆಕೆಳಗೆ ಕಾಲುಮೇಲಾಗಿ ಅವನ್ನು ಹಿಡಿಯುವ ಕ್ರಮ. ಇದು ಸಂತೆಯಲ್ಲಿ ಕಾಣುವ ನೋಟ.

ತಲೆಯೇ ಶ್ರೇಷ್ಠವೆಂದೆಣಿಸುವುದು ಒಂದು ವಿಧದಲ್ಲಿ ತಪ್ಪೆಂದು ತೋರಿಸಲಿಕ್ಕೆ ಇಷ್ಟೊಂದು ಉದ್ದಕ್ಕೆ ಉಪನ್ಯಾಸವನ್ನೆಳೆದೆವು. ಕಾಲುಗಳಿಗೂ ಶ್ರೇಷ್ಠತೆಯಿದೆ. ಅನೇಕರು ತಲೆಯ ವಿಷಯ ಉಪನ್ಯಾಸವನ್ನು ಬರೆದು, ಅದನ್ನು ಹೆಚ್ಚಾಗಿ ಹೊಗಳಿ ತಲೆಯನ್ನುಬ್ಬಿಸಿರುತ್ತಾರೆ. ಆದುದರಿಂದ ಆ ಉಬ್ಬಿದ ತಲೆಯನ್ನು ಕೆಳಗಿಳಿಸಲಿಕ್ಕೆ ನಾವೂ ತಲೆಕೆಳಗೆ ಕಾಲುಮೇಲೆ ಮಾಡಿದ್ದೇವೆ. ಶೀರ್ಷಾಸನದಿಂದ ಜನರಿಗೆ ಹೆಚ್ಚು ಆರೋಗ್ಯಲಾಭವಿದೆಯೆಂದು ನಾವು ಕೇಳಿರುತ್ತೇವೆ.

# ಪಟಾಕಿ
## ಮತ್ತು ಇತರ ಕಥೆಗಳು

--------

### ೧. ಪಟಾಕಿ

ಪಟಾಕಿಯೆಂಬುದು ಟಾಕಿಯಂತೆ ನಗರವಾಸಿ. ಅದಕ್ಕೆ ನಾಗರಿಕತೆ ಯಿದೆ. ಹಳ್ಳಿಯುವರಿಗೆ ಈ ವಸ್ತುವಿನಲ್ಲಿ ವಿಶೇಷ ಪ್ರೀತಿಯಿಲ್ಲ. ಆದರೆ ನಗರಕ್ಕೆ ಆಗಾಗ್ಗೆ ಬಂದು ಹೋಗುವವರಿಗೆ ಇದರ ಅರಿವಿಲ್ಲವೆಂದು ಹೇಳ ಲಾಗುವುದಿಲ್ಲ. ನಾಗರಿಕರೊಡನೆ ಸೇರಿದವರಿಗೆ ಅದರ ಗಂಧವಿದೆ.

ನಗರವಾಸಿಗಳಿಗೆ ಸಮಯವಿದ್ದಾಗ ಪಟಾಕಿ ಹೊಡಿಯುವ ಅಭ್ಯಾಸ ವಿದೆ. ಹಾಗೆ ಒಂದೆರಡು ಪಟಾಕಿಗಳನ್ನು ಹಾರಿಸದಿದ್ದರೆ ನಿದ್ದೆ ಬಾರದಿದ್ದ ವರೂ ಇರುವರು. ಪಟಾಕಿ ಹೊಡಿಯುವಾಗ ಕೇಳಲಿಕ್ಕೆ ಜನರಿದ್ದರೆ ಬಹಳ ಅನುಕೂಲ. ಹಾಗೆ ಕೇಳುವವರು ಇಲ್ಲದಿದ್ದರೆ ತಮ್ಮಷ್ಟಕ್ಕಾದರೂ ಅವನ್ನು ಹಾರಿಸಿ ಸಂತೋಷ ಪಡೆಯುವವರೂ ಇರುವರು.

ದೀಪಾವಳಿ ವೇಳೆಯ ಪಟಾಕಿಗಳನ್ನು ಇಲ್ಲಿ ಹಾರಿಸಿ ಪ್ರಯೋಜನವಿಲ್ಲ. ಅದು ಮಕ್ಕಳಾಟವಾಗುತ್ತದೆ. ಆದರೆ, ಈ ಸಮಯದಲ್ಲಿ ಇಂತಹ ನಿಜವಾದ ಪಟಾಕಿಗಳನ್ನು ಹೊಡೆಯುವುದರಲ್ಲಿ ಗಡ್ಡ ಮೀಸೆ ಬೆಳೆದ ಮಕ್ಕಳೂ ಸಹ ಕರಿಸುತ್ತಾರೆ. ಮಕ್ಕಳಿಗೋಸ್ಕರವೆಂದು ಪಟಾಕಿಗಳನ್ನು ತರುವುದು; ಅವನ್ನು ಉರಿಸಿ ಶಬ್ದಾಡಂಬರವನ್ನು ಮಾಡುವುದು ಹೆಚ್ಚಾಗಿ ಗಡ್ಡಧಾರಿಗಳೆ. ಆದುದರಿಂದ ಚಿಕ್ಕಮಕ್ಕಳ ಕರ್ತವ್ಯವಾವುದೆಂದರೆ—ದೊಡ್ಡವರು ಹೊಡೆವ ಪಟಾಕಿಗಳ ಶಬ್ದವನ್ನು ಕೇಳುವುದು. ತಿರುಗಿ ಪಟಾಕಿಯನ್ನು ತರಬೇಕೆಂದು ಕೂಗುವುದು. ಈ ಹೊಸ ಪಟಾಕಿಯನ್ನು ಹೊಡೆಯುವುದೂ ದೊಡ್ಡವರೇ.

ದೊಡ್ಡವರ ಪಟಾಕಿಗೆ ಬೆಲೆ ಹೆಚ್ಚಾದರೂ ಸಣ್ಣವರ ಪಟಾಕಿಯನ್ನು ಅಲಕ್ಷ್ಯಭಾವದಿಂದ ನೋಡಲಿಕ್ಕಾಗುವುದಿಲ್ಲ. ಸಣ್ಣವರೆಂದರೆ ಮುಂದೆ ಪಟಾಕಿ ಹಾರಿಸುವವರು. ಆದುದರಿಂದ ಅವರ ಪಟಾಕಿಗಳನ್ನು ಪ್ರಥಮ ದಲ್ಲೇ ಪರೀಕ್ಷಿಸಿ, ಮತ್ತೆ ದೊಡ್ಡವರ ಪಟಾಕಿಗೆ ಕೈಹಚ್ಚಬಹುದು.

ಮಕ್ಕಳು ಪಟಾಕಿ ಹೊಡೆಯುವುದು ಸಾರ್ವಜನಿಕ ರಸ್ತೆಯಲ್ಲಿ ಅವರ ಮಾತುಗಳನ್ನು ಕೇಳಿದರೆ ಪಟಾಕಿಗಳನ್ನು ಹೆಕ್ಕಿ ತೆಗೆಯುವುದು ಸುಲಭ ಸಾಧ್ಯ. ಒಬ್ಬನಿಗೊಂದು ಹೊಸ ಅಂಗಿ. ಅದನ್ನು ನೋಡಿ "ನಿನ್ನ ಅಂಗಿ ಅಂದವಿದೆ: ಎಲ್ಲಿ ಮಾಡಿಸಿದುದು?" ಎಂಬ ಪ್ರಶ್ನೆಗೆ ಉತ್ತರ:–"ಮನೆಯಲ್ಲಿ ಇನ್ನೂ 50 ಅಂಗಿಗಳಿವೆ; ಅವನ್ನೆಲ್ಲ ಮೊನ್ನೆ ತಂದೆಯವರು ನನಗೋಸ್ಕರ ಮಾಡಿಸಿದುದು. ನಿನಗೆಷ್ಟು ಅಂಗಿಗಳಿವೆ?" ಇದೊಂದು ಚಿಲ್ಲರೆ ಪಟಾಕಿ.

ಒಬ್ಬ ಹುಡುಗನ ಹತ್ತಿರ ಒಂದು ಚಿಕ್ಕ ಟ್ರ್ಯಾಸಿಕಲ್ ಇದ್ದರೆ, ಅದನ್ನು ನೋಡಿ ಬೇರೆ ಹುಡುಗನು ಕೂಡಲೇ "ತನ್ನಲ್ಲಿ 6 ಚಕ್ರದ ಟ್ರ್ಯಾಸಿಕಲ್ ಇದೆ" ಅನ್ನುತ್ತಾನೆ. ಇನ್ನೊಬ್ಬ ಅಲ್ಲ ಸೇರಿದರೆ ಟ್ರ್ಯಾಸಿಕಲ್ಲಿಗೆ 9 ಅಥವಾ 12 ಚಕ್ರಗಳು ಸುಲಭವಾಗಿ ಹುಟ್ಟುವುವು. ರಾವಣನಿಗೆ ಹತ್ತು ತಲೆಗಳು ಇರುವುದರಲ್ಲಿ ಜನರು ಆಶ್ಚರ್ಯಪಡಬೇಕಾಗಿಲ್ಲ. ದಾಶರಥಿಯನ್ನು ಸೋಲಿಸಬೇಕೆಂಬ ಆಶೆಯಿಂದ ರಾವಣನು ದಶಶಿರಗಳನ್ನು ಧರಿಸಿದನು.

ಶೇಕ್ಸ್‌ಪಿಯರ್ ಬರೆದ ನಾಟಕಗಳಲ್ಲಿ ಹಲವು ಪಟಾಕಿಗಳ ಉದಾಹರಣೆಗಳಿವೆ. ಅಂತೋಣಿಯು ಕ್ಲಿಯೋಪಾತ್ರಳನ್ನು ಪ್ರಥಮದಲ್ಲಿ ಸಂದರ್ಶಿಸುವಾಗ ಒಂಭತ್ತು ಸಲ ಗಡ್ಡವನ್ನು "ರೇಜರಿಸಿದ"ನಂತೆ. ಮತ್ತು ಫ್ಹೋಲ್‌ಸ್ಟಾಫನ ಪಟಾಕಿಗಳಿಗೆ ಲೆಕ್ಕವಿಲ್ಲ. ಈತನಿಗೆ ಇಬ್ಬರು ಜನರು ಇದಿರಿಸಿದಾಗ, ಮತ್ತು ಅವನು ಅವರಿಂದ ತಪ್ಪಿಸಿಕೊಂಡು ಓಡಿದಾಗ, ಅವನ ಹೇಳಿಕೆಯೇನೆಂದರೆ: 53 ಜನರು ತನ್ನ ಮೈಮೇಲೆ ಹಾರಿದರೆಂದೇ. ಇವೆರಡೂ ಪಟಾಕಿಗಳು.

ನಮ್ಮ I. C. S. ಮಾಸ್ಟ್ರು ಕಲಿಸಿದ ವಿದ್ಯಾರ್ಥಿಗಳೆಲ್ಲ I. C. S. ಪರೀಕ್ಷೆ ಪಾಸಾದವರೇ: ತಪ್ಪಿದರೆ ಹೈಕೋರ್ಟು ಜಡ್ಜರು. ಇದರಿಂದ ಅವರ ಮಾಸ್ತರರಿಗೂ I. C. S. ಎಂಬ ಪದವಿಯನ್ನು ನಾವು ಉಚಿತವಾಗಿ ದಾನಮಾಡಿದುದು. ಬೇರೆ ಚಿಲ್ಲರೆ ಆಫೀಸರರೆಲ್ಲ ಬೇರೆ. ಬೇರೆ ಚಿಲ್ಲರೆ ಮಾಸ್ತರರ ಕೈಕೆಳಗೆ ಅಥವಾ ಕಾಲ್ಕೆಳಗೆ ಕಲಿತವರು. ಇದೂ ಒಂದು ಪಟಾಕಿ

ಕ್ರಿಕೆಟ್ ಪಂದ್ಯಾಟದವರಿಗೆ ಮೇಚ್ ಆಡುವಾಗ ಬರೇ ಅರ್ಧ ದಿನದ ಕಾಫಿ ತಿಂಡಿ ಸೋಡಾ ಖರ್ಚು 18 ರೂಪಾಯಿ. ಆಟವಾಡುವುದು ಕಡಿಮೆ, ತಿನ್ನುವುದು ಹೆಚ್ಚು, ಎಂದು ವಾಚಕರಿಗೆ ತೋರಬಹುದು. ಆದರೆ ಇದು ಪಟಾಕಿಮಾಲೆಯಲ್ಲೊಂದು.

ಮನೆಯ ಯಜಮಾನರ ಸಂಬಳ ಎಷ್ಟು ಎಂಬ ಪ್ರಶ್ನೆಯನ್ನು ಮನೆಯ ಹೆಂಗಸರೊಡನೆ ಕೇಳಿದರೆ, ನಮ್ಮ ಸ್ತ್ರೀವರ್ಗಕ್ಕೂ ಪಟಾಕಿ ಹೊಡೆಯುವ ಸಂದರ್ಭವನ್ನು ಒದಗಿಸಿದಂತಾಗುವುದು. ಸಾಧಾರಣ 1000 ರೂಪಾಯಿಗಿಂತ ಕಡಿಮೆ ಸಂಬಳದವರು ನಮ್ಮಲ್ಲಿ ಅತಿ ವಿರಳವೆಂಬುದು ಆಗ ನಮಗೆ ಖಚಿತವಾಗುತ್ತದೆ. ಕೆಲಸ ಸಿಗುವುದೇ ಕಷ್ಟ; ಸಿಕ್ಕಿದ ಮೇಲೆ ಸಂಬಳಕ್ಕೇನೂ ಕಮ್ಮಿಯಿಲ್ಲ. ಇದು ಇನ್ನೊಂದು ಪಟಾಕಿ.

ನಮ್ಮ ಕೈಯಿಂದ ಎರಡು ರೂಪಾಯಿಯನ್ನು ಕಡವಾಗಿ ತೆಗೆದು ಕೊಂಡು ಹೋದ ಗೃಹಸ್ಥರೊಬ್ಬರಿರುವರು. ಆ ರೂಪಾಯಿಗಳು ನಮ್ಮನ್ನಗಲಿ ಆರು ವರ್ಷಗಳು ಕಳೆದುವು. ನಮಗೆ ಅವರು ಯಾವಾಗಲೂ ಸಿಕ್ಕುವವರು. ರೂಪಾಯಿಗಳು ಮಾತ್ರ ಸಿಕ್ಕುವಂತಿಲ್ಲ. ನಮ್ಮನ್ನು ನೋಡಿದ ಕೂಡಲೇ ಅವರು ಹತ್ತು ರೂಪಾಯಿ ಚೆಕ್ ಇದೆ; ಇಂದು ಆದಿತ್ಯವಾರ; ನಾಳೆ ಪಟಾಯಿಸಿ ಎರಡು ರೂಪಾಯಿಗಳನ್ನು ಕೊಟ್ಟು ಬಿಡುತ್ತೇನೆ' ಎಂದು ಪಟಾಕಿ ಹಾರಿಸುವುದುಂಟು. ಎಂದರೆ 10 ರೂಪಾಯಿ ಚೆಕ್, ಚೀಲದಲ್ಲಿ, ಯಾವಾಗಲೂ ನಮ್ಮಂತಹರನ್ನೆಲ್ಲ ಹೆದರಿಸಲಿಕ್ಕೆ ತಯಾರಾಗಿದೆ ಎಂದರ್ಥ. ಇದು ಮುದುಕರ ಪಟಾಕಿ.

ಇಷ್ಟು ದೀರ್ಘವಾಗಿ ಬರೆಯುವಾಗ ಇಲ್ಲಿ ಪಟಾಕಿ ಎಂಬುದರ ನಿಜವಾದ ಅರ್ಥವನ್ನು ಇಷ್ಟರ ವರೆಗೂ ಹೇಳದೆ ಇದ್ದುದು ನಮ್ಮ ತಪ್ಪು. ಪಟಾಕಿಯೆಂದರೆ ಸುಳ್ಳಲ್ಲ. ಅದು ಒಂದು ಬಗೆಯ ಸತ್ಯವೇ. ಮತ್ತು ನಾವು ಮೇಲೆ ಹೇಳಿದ ಮುದುಕರು ಸುಳ್ಳಾಡುವವರಲ್ಲ ಅವರು ಗೀತಾಧ್ಯಯನ ಮಾಡುವವರು. ಎಂದ ಮೇಲೆ ಸುಳ್ಳಿಗೆ ಆ ಸ್ಥಳದಲ್ಲಿ ಎಡೆಯಿಲ್ಲ. 10 ರೂಪಾಯಿಯ ಚೆಕ್ ಇದೆಯೆಂಬುದು ನಿಜವೆಂದು ಮಾತ್ರ ಅವರ ಹೇಳಿಕೆ. ಇದು ಅಕ್ಷರಶಃ ನಿಜ. 100, 1000 ರೂಪಾಯಿಗಳ ಚೆಕ್ ಸಹ ಇವೆ. ಅವರು ಹೇಳಿದ್ದು ಸಹ ಚೆಕ್ ಇದೆಯೆಂದಲ್ಲದೆ ಯಾರೊಡನೆ ಆ ಚೆಕ್ ಇದೆ ಎಂದು ಹೇಳಲಿಲ್ಲ. ಆದುದರಿಂದ ಅವರ ಮಾತು ಸುಳ್ಳಲ್ಲ. ಪಟಾಕಿ.

ನಮಗೆ ವರ್ಷ ವರ್ಷ ಎಲ್ಲೆಲ್ಲಿಂದ ಬಂದ ರಿಪೋರ್ಟುಗಳಲ್ಲಿ ಸಹ ಹಲವು ಪಟಾಕಿಗಳು ಕಂಡುಬರುವವು. ಒಂದರಲ್ಲಿ "ನಾವು ಕಾಗೆಗಳನ್ನು ಹಿಡಿದು ಗೂಗೆಗಳನ್ನಾಗಿ ಮಾಡುವ ಪ್ರಯತ್ನವನ್ನು ನಮ್ಮ ಸರ್ವ ಶಕ್ತಿ

ಯಿಂದಲೂ ಸಾಧಿಸಿರುತ್ತೇವೆ." ಇನ್ನೊಂದರಲ್ಲಿ ಇದರ ಪ್ರಭಾವವನ್ನು ಅಳಿಸಿ, ತಮ್ಮ ಸ್ವಪ್ರಭಾವವನ್ನು ಪ್ರಕಾಶಗೊಳಿಸಲಿಕ್ಕೆ, "ನಾವು ಕಾಗೆಗಳನ್ನು ಹಿಡಿಯಲಾರೆವು. ಮತ್ತು ಅವನ್ನು ಗೂಗೆಗಳನ್ನಾಗಿ ಮಾರ್ಪಡಿಸುವ ಅಸಾಧ್ಯ ಕಾರ್ಯಕ್ಕೂ ಕೈಹಚ್ಚಲಾರೆವು. ಆದರೆ, ಎಲ್ಲರಿಗೂ ಸಾಹಸದಿಂದ ಕೈಗೂಡುವ ಕತ್ತೆಗಳನ್ನು ಕುದುರೆಗಳನ್ನಾಗಿ ಮಾಡುವ ಕೆಲಸವನ್ನು ಕೈಕೊಂಡಿರುವೆವು. ಇದನ್ನೊಂದು ಸಾಧಿಸಿಬಿಟ್ಟರೆ ಮಿಕ್ಕ ಕಾರ್ಯಗಳು ಕಷ್ಟವಿಲ್ಲದೆ ಸಾಧ್ಯವಾಗುವುವು...." ಇತ್ಯಾದಿ.

ಇವೆಲ್ಲಕ್ಕಿಂತಲೂ ದೊಡ್ಡ ಪಟಾಕಿಯಿದೆ. ಅದನ್ನು ನಾವು ಮೊನ್ನೆ ಕೇಳಿದುದು. ನಮ್ಮ "ಬಾರ್ಬರ್" ನಮಗೆ ಹೇಳಿದ್ದು. "ನಮ್ಮ ಜಾತಿಗೆ ಯಾವ ಬಗೆಯ ಮಾಂಸವೂ ತಿನ್ನಲಿಕ್ಕೆ ಸಾಧ್ಯವಿದೆ; ನಮ್ಮವರು ಅವನ್ನೆಲ್ಲಾ ತಿನ್ನುತ್ತಾರೆ." ಅವರ ಲಿಸ್ಟ್ ಪ್ರಕಾರ ಸಮುದ್ರದಲ್ಲಿರುವ ಸ್ಟೀಮರ್, ಪತ್ತೆಮಾರಿ, ದೋಣಿ, ಲೋಂಚನ್ನುಳಿದು ಬಾಕಿಯೆಲ್ಲ ನಮ್ಮ "ಲಂಚಿ"ಗೆ ಯೋಗ್ಯವಾದ ಪ್ರಾಣಿಗಳು. ಆಕಾಶದಲ್ಲಿ ಹಾರುವ ಪ್ರಾಣಿಗಳಲ್ಲಿ ನಾವು ತಿನ್ನದೆ ಇರುವುದು ಏರೋಪ್ಲೇನ್ ಒಂದೇ. ಇದು "ಗರ್ನಲ್" ಪಟಾಕಿ.

---

## ೨. ತೈಲಾಭ್ಯಂಗ

ದೀಪಾವಳಿ ಹಬ್ಬದ ದಿನಗಳಲ್ಲಿ ಎಣ್ಣೆಗೆ ಒಂದು ವಿಧದ ಪ್ರಾಮುಖ್ಯತೆ ಬರುತ್ತದೆ. ಎಣ್ಣೆಯ ಡಬ್ಬಿಗಳು ಸಾಲು ಸಾಲಾಗಿ ಹೊರುವವರ ಹೆಗಲನ್ನೇರಿ ಅಂಗಳವನ್ನು ದಾಟಿ ಮನೆಮನೆಗೆ ಸವಾರಿ ಮಾಡುವುವು. ಕಾರಣವು ಗೊತ್ತೇ ಇದೆ. ದೀಪಾವಳಿ ಕಾಲದಲ್ಲಿ ಎಲ್ಲಾ ತಿಂಗಳುಗಳಲ್ಲಿ ಉರಿಸುವುದಕ್ಕಿಂತ ಹೆಚ್ಚು ದೀಪಗಳನ್ನು ಉರಿಸಬೇಕು. ಹಟ್ಟಿ, ಬಾವಿ, ತುಲಸೀಕಟ್ಟೆಗಳಲ್ಲಿ ಹಣತೆಗಳನ್ನು ಉರಿಸಬೇಕು. ಸಾಕಾಗದಿದ್ದರೆ ಹಬ್ಬಕ್ಕೆ ಮುಖ್ಯವಾದ ತೈಲಾಭ್ಯಂಗವಾಗಬೇಕು. ಇದಕ್ಕೋಸ್ಕರವೇ ಪ್ರತಿಯೊಂದು ಮನೆಯಲ್ಲಿ ಎರಡು ಅಥವಾ ಮೂರು ಕುತ್ತಿ ಎಣ್ಣೆಯನ್ನು ಪ್ರತ್ಯೇಕವಾಗಿ ಶೇಖರಿಸಿಡಬೇಕು. ಇಲ್ಲದಿದ್ದರೆ ದೀಪಾವಳಿ ಹಬ್ಬದ ಸ್ನಾನವಾಗುವುದಿಲ್ಲ.

ಈ ಮೂರು ಕುತ್ತಿಯ ಲೆಕ್ಕಾಚಾರವನ್ನು ಈಗ ಸಂಕ್ಷೇಪವಾಗಿ ವಾಚಕರ ಮುಂದಿಡುತ್ತೇವೆ ಒಂದು ಕತ್ತಿ ಮನೆಯ ಯಜಮಾನನಿಗೆ;

ಇನ್ನೊಂದು ಮನೆಯ ಹೆಂಗುಸರಿಗೆ. ಉಳಿದ ಒಂದು ಕುತ್ತಿ ಮನೆಯ ಮಕ್ಕಳಿಗೆ–ಹೀಗೆ ಮೂರು ಕುತ್ತಿ ಎಣ್ಣೆಯು ಖರ್ಚು ಆಗಲೇಬೇಕು. ಅದು ಹೇಗಾಗುತ್ತದೆಂದು ವಿವರಿಸದಿದ್ದರೆ ಈ ಸ್ಟೇಟ್‌ಮೆಂಟನ್ನು ಯಾರೂ ನಂಬಲಿಕ್ಕಿಲ್ಲ. ನಾವು ಪ್ರತ್ಯಕ್ಷ ಕಣ್ಣಿನಿಂದಲೇ ನೋಡಿ ತಿಳಿದುಕೊಂಡ ವಿಷಯವಿದು. ಆದುದರಿಂದ ಇದರಲ್ಲಿ ಲೇಶವೂ ಸುಳ್ಳಿಲ್ಲವೆಂದು ಸುಜ್ಞಾನಿಗಳಾದ ವಾಚಕರಿಗೆ ತಿರುಗಿ ಒತ್ತಿ ಹೇಳಬೇಕಾದುದಿಲ್ಲ.

ಆದರೂ ಒಂದು ಕುತ್ತಿಯು ಯಜಮಾನನಿಗೇಕೆಂದು ವಿಸ್ಮಯಪಡುವವರಿಗೆ ಮತ್ತಷ್ಟು ವಿಷಯವನ್ನು ವಿಶದಗೊಳಿಸಲು ಪ್ರಯತ್ನಿಸುವೆವು. ಅದಕ್ಕೆ ಮನೆಯ ಯಜಮಾನರ ಗಾತ್ರವನ್ನೂ, ಅವರು ಎಣ್ಣೆಯನ್ನು ಪ್ರಯೋಗಿಸುವ ವಿಧಿಯನ್ನೂ ಇಲ್ಲಿ ಬರೆಯುವ ಅವಶ್ಯಕತೆಯಿದೆ. ಸುಮಾರು ೫ ಅಡಿ ೧೦ ಅಂಗುಲ ಉದ್ದದ ದೇಹ; ೫೦ ಅಂಗುಲ ಸುತ್ತಳತೆಯ ಹೊಟ್ಟೆ. ಇದು ಹೊಟೆಲುಗಳಲ್ಲಿ ದಿವಸಕ್ಕೆರಡು ಸಲ ತಿಂಡಿತೀರ್ಥಗಳನ್ನು ಭಕ್ಷಿಸಿದ ಮತ್ತು ಆಸ್ವಾದಿಸಿದುದರ ಫಲ. ಸಾಮಾನ್ಯ ಗಾತ್ರದ ಕಾಲುಗಳು ಮತ್ತು ಕೈಗಳು; ಸಾಕಾಗದಿದ್ದರೆ ದೊಡ್ಡ ತಲೆ. ಇಷ್ಟೆಲ್ಲ ಅವಯವಗಳು ದೀಪಾವಳಿ ದಿನದ ಸ್ನಾನಕ್ಕಾಗಿ ಕಾದುಕೊಂಡಿರುವ ವ್ಯಕ್ತಿಗಳು. ಅವುಗಳನ್ನು ಸಂತೃಪ್ತಿಗೊಳಿಸಬೇಕಾದರೆ ಒಂದು ಕುತ್ತಿ ಸಾಲದು. ಆದರೂ ಈ ಆಜಾನುಭಾವ ದೇಹವು ಬೇರೆ ಉಪಾಯವಿಲ್ಲದೆ ತೃಪ್ತಿಪಡಬೇಕಾಗಿದೆ.

ಇನ್ನೂ ನಂಬಲಿಕ್ಕೆ ಸ್ವಲ್ಪ ಕಷ್ಟವೆಂದು ಹೇಳಿದರೆ, ಸರಿಯಾದ ಲೆಖ್ಖವನ್ನು ಹಾಕಿ, ತೋರಿಸುತ್ತೇವೆ. ಎಲ್ಲಾ ಬಗೆಯ ಕಷ್ಟದ ಕೆಲಸವನ್ನು ಮಾಡುವ ಇಡೀ ಮನೆಯ ವಿಚಾರವನ್ನು ಪ್ರತೀ ನಿಮಿಷದಲ್ಲಿ ಆಲೋಚಿಸುವ ತಲೆಗೆ ಒಂದು ಕುಡ್ತೆ ಎಣ್ಣೆ. ಎರಡು ಕೈಗಳಿಗೆ ಒಂದು ಕುಡ್ತೆ. ಕಾಲುಗಳಿಗೆ ಎರಡು ಕುಡ್ತೆ. ಬೆನ್ನಿಗೆ ಮತ್ತು ಅದಕ್ಕೆ ಸಂಬಂಧಿಸಿದ ಅವಯವಗಳಿಗೆ ಇನ್ನೊಂದು ಕುಡುತೆ. ಕಾಲು ಕುಡುತೆ ಕಿವಿಗಳಿಗೆ; ಉಳಿದ ಮೂರು ಮತ್ತು ಮುಕ್ಕಾಲು ಕುಡುತೆ ಹೊಟ್ಟೆಗೆ. ನಾಲ್ಕು ಅಥವಾ ಐದು ಸಲ ಎಣ್ಣೆಯನ್ನು ಹೀಗೆ ತಿಕ್ಕಿ ತಿಕ್ಕಿ ಉಜ್ಜಿದರೆ ಇಡೀ ಕುತ್ತಿ ಎಣ್ಣೆಯನ್ನು ದೇಹವು ಕಷ್ಟವಿಲ್ಲದೆ ಕುಡಿಯುವುದು. ಎಣ್ಣೆಯನ್ನು ಉಜ್ಜಿಕೊಳ್ಳುವಾಗ ನಿಂತ ಸ್ಥಳವೂ ಇದರಲ್ಲೊಂದು ಅಲ್ಪಾಂಶವನ್ನು ಕುಡಿದು ಬಹುಮಟ್ಟಿಗೆ ತೃಪ್ತಿಗೊಳ್ಳುವುದು.

ಎಣ್ಣೆಯನ್ನು ಬರೀ ಸವರಿಕೊಳ್ಳುವುದಲ್ಲ. ಇಡೀ ದೇಹವನ್ನು ಎಣ್ಣೆಯಲ್ಲಿ ಅದ್ದಿದರೆ ಮಾತ್ರವೇ ತೈಲಾಭ್ಯಂಗವಾಗುವುದಲ್ಲದೆ, ಒಂದುವರೆ ಕುಡ್ತೆಯನ್ನು ಮೈಗೆ ಬಳಿದುಕೊಂಡರೆ ಅದು ತೈಲಾಭ್ಯಂಗವೆನಿಸದು.

'ಉಪ್ಪು ತಿಂದವ ನೀರು ಕುಡಿದಾನು' ಎಂಬಂತೆ 'ಎಣ್ಣೆ ಬಳಿದುಕೊಂಡವನು ತಣ್ಣೀರು ಮಿಂದಾನು' ಎಂಬ ನಾಣ್ಣುಡಿ ಇದೆ. ಆದರೆ ಇದು ದೀಪಾವಳಿಯ ಸ್ನಾನವಲ್ಲ. ಅದಕ್ಕೆ ಬಿಸಿ ನೀರು, ಬಿಸಿಬಿಸಿ ನೀರುಬೇಕು. ಗಂಡುಸರಿಗೆ ಬಿಸಿ ನೀರು. ಹೆಂಗುಸರಿಗೆ ಬಿಸಿಬಿಸಿ ನೀರು. ಆದುದರಿಂದ ಗಂಡುಸರ ಬಿಸಿ ಸ್ನಾನವಾದ ಮೇಲೆ ಮಕ್ಕಳ ಅರೆಬಿಸಿ ಸ್ನಾನ. ಅದಾದ ಮೇಲೆ ನೀರಿನ ಹಂಡೆಗೆ ಕುದಿಯುವ ಕೆಲಸ. ಇಂತಹ ನಾಲ್ಕಾರು ಕುದಿಯುವ ಹಂಡೆಯ ನೀರು ದೀಪಾವಳಿಯ ಸ್ನಾನಕ್ಕೆ ಹೆಂಗುಸರಿಗಾಗಿ ಅತ್ಯಾವಶ್ಯಕವಾಗಿದೆ.

ಕುದಿಯುವ ನೀರಿನ ಸ್ನಾನವೆಂದರೆ ಶಾಸ್ತ್ರೋಕ್ತ ಸ್ನಾನ. ಇಲ್ಲಿ ಶಾಸ್ತ್ರದ ಮಾತು ಬರಲಿಕ್ಕೆ ಎಡೆಯಿದೆ. ನಮ್ಮದು ವಿಜ್ಞಾನಶಾಸ್ತ್ರದ ಯುಗ. ವಿಜ್ಞಾನ ಶಾಸ್ತ್ರಜ್ಞಾನವು ನಮಗತ್ಯಾವಶ್ಯಕವಾದುದು. ಆದರೆ ಹೆಂಗುಸರಲ್ಲಿ ಈ ಶಾಸ್ತ್ರದ ಜ್ಞಾನವು ಓದುವಿಕೆ ಇಲ್ಲದೆಯೇ ತುಂಬಿ ಕೊಂಡಿರುವಂತಹದು. ಮತ್ತು ಅನಾದಿಯಿಂದ ಅದು ಅವರ ರಕ್ತನಾಳಗಳಲ್ಲೆಲ್ಲ ವ್ಯಾಪಿಸಿಕೊಂಡಿರುವಂತಹದು. ಬಿಸಿಬಿಸಿ ನೀರಿನ ಸ್ನಾನವೇ ಇದಕ್ಕೆ ಯೋಗ್ಯವಾದ ನಿದರ್ಶನ. ನಾವು ಶಾಸ್ತ್ರವನ್ನೋದಿ ಕುಡಿಯುವ ನೀರನ್ನು ಮಾತ್ರ ಕುದಿಸುತ್ತೇವೆ. ಆ ನೀರಲ್ಲಿರುವ 'ಜರ್ಮನಿ'ಗಳನ್ನು ನಾಶಪಡಿಸಲಿಕ್ಕೆ. ಆದರೆ ಹೆಂಗುಸರ ಶಾಸ್ತ್ರಜ್ಞಾನವು ಅಗಾಧವಾದುದು. ಅವರು ಮೀಯುವ ನೀರನ್ನು ಸಹ ಶಾಸ್ತ್ರೋಕ್ತವಾಗಿ ಕುದಿಸುತ್ತಾರೆ.

ನೀರನ್ನು ಹಂಡೆಯಲ್ಲಿ ಸುಮುಹೂರ್ತದಲ್ಲಿ ತುಂಬುವಾಗ ಮನೆಯಲ್ಲಿದ್ದ ಬಟ್ಟಲುಗಳಿಗೆಲ್ಲ ಚೆನ್ನಾಗಿ ಬಡಿತವಾಗುತ್ತದೆ. ಆ ಬಟ್ಟಲುವಾದ್ಯದ ಜಯಘೋಷದಿಂದ ಅಥವಾ ಗಾಯನದಿಂದ ನೀರನ್ನು ತುಂಬಿಸುವ ಕೆಲಸವಾಗುತ್ತದೆ. ಅನಂತರ ಗಂಡುಸರ ಸ್ನಾನವಾಗುವ ಸಮಯದಲ್ಲಿ ಮಕ್ಕಳ ಸ್ವಾಭಾವಿಕವಾದ ವಾದ್ಯವೂ ನಡೆಯುತ್ತದೆ. ಹೀಗಾಗಿ ಎಲ್ಲಾ ಬಗೆಯ ಶಬ್ದಗಳೂ ಗೀತವಾದ್ಯಗಳೂ, ಮನೆಯಲ್ಲಿ ಜನರಿದ್ದಾರೆಂಬುದನ್ನು ಲೋಕಕ್ಕೆ ಸಾರುವುವು. ನೃತ್ಯವೂ ಇದೆ. ಆದರದು ಹೊರಗಿನ ಕೆಲಸಮಾಡುವ ಸೇವಕಳ

ಪಾಲಿಗೆ ಬೀಳುತ್ತದೆ. ಅವಳಿಗೆ ಆದಷ್ಟು ಬೇಗ ಕೆಲಸ ತೀರಿಸಿ ಸ್ವಂತ ಮನೆಗೆ ಸೇರಬೇಕೆಂಬ ಸದುದ್ದೇಶವಿದೆ. ಆ ಕೆಲಸವು ಬೇಕಾದಷ್ಟು ಬೇಗನೆ ಮುಗಿಯುವುದಿಲ್ಲ ಆದುದರಿಂದ ನೃತ್ಯ, ಸ್ತೋತ್ರ, ಇತ್ಯಾದಿ.

ಈಗಿನ ಎಣ್ಣೆಯೂ ಶಾಸ್ತ್ರೋಕ್ತ ವಿಧಿಯಲ್ಲಿ ತಯಾರಾದುದು. ಆದುದರಿಂದ ಬಹಳ ಬಲವುಳ್ಳದ್ದು ಅದರೊಟ್ಟಿಗೆ ಯುದ್ಧ ಮಾಡಲಿಕ್ಕೆ ಸಾಧಾರಣವಾಗಿ ಯಾವ ಸಾಬೂನಿಗೂ ಶಕ್ತಿಯಿಲ್ಲ. ಮೈಗೆ ಬಳಿದ ಎಣ್ಣೆಯು ಬಲವಾಗಿ ಅಂಟಿಕೊಂಡಿರುತ್ತದೆ. ಬಿಸಿನೀರು ಮತ್ತು ಸಾಬೂನು ಇವರಿಬ್ಬರೂ ಒಪ್ಪಂದ ಮಾಡಿ ಒಂದೇ ಪಾರ್ಟಿಯವರಾಗಿ ಎಣ್ಣೆಗೆ ವಿರುದ್ಧವಾಗಿ ಯುದ್ಧ ಮಾಡಿದರೂ, ಆ ಎಣ್ಣೆಯನ್ನು ಸೋಲಿಸಿ ಕಳಗಿಳಸಲಿಕ್ಕೆ ಇವರಿಗೆ ಸಾಧ್ಯವಾಗುವುದಿಲ್ಲ. ಆದುದರಿಂದ ಎರಡು ಮೂರು ಸಾಬೂನುಗಳು ಎಣ್ಣೆಯನ್ನಿದಿರಿಸಿ ಖಾಡಾಖಾಡಿ ಯುದ್ಧವನ್ನು ಮಾಡಿ ಮಡಿಯುವುವು. ಹೀಗಾದರೂ ಎಣ್ಣೆಯ ಪಸೆಯು ಹಿಂದುಳಿಯುವುದು.

ಹತ್ತು ಹನ್ನೆರಡು ವರ್ಷಗಳ ಹಿಂದಿನ ಸ್ಥಿತಿಯನ್ನು ವಿಚಾರಿಸಿದರೆ ಆಗ ಯಾವ ಎಣ್ಣೆಯನ್ನೂ ಅಳಿಸಿ ಕರಗಿಸುವ ಶಕ್ತಿಯುಳ್ಳ ಸಾಧನವು ನಮ್ಮಲ್ಲಿತ್ತು. ಅದು ಎಲ್ಲರಿಗೆ ಗೊತ್ತಿರುವ ವಸ್ತು—ಸೀಗೆಕಾಯಿ ಹುಡಿ. ದೀಪದ ಎಣ್ಣೆಯೆಂಬ ಅತಿ ದಪ್ಪವಾದ ಎಣ್ಣೆಯನ್ನು ಕೂಡ ಈ ಸೀಗೆಹುಡಿಯು ನಿರ್ಭಯವಾಗಿ ಇದಿರಿಸುತ್ತಿತ್ತು. ಈಗ ಆ ವಸ್ತುವು ಮಾಯವಾಗಿ ಹೋಗಿದೆ—ಸೋಪುಗಳ ಪ್ರಭಾವದಿಂದ. ಆದರೆ ಹಳ್ಳಿಗಳಲ್ಲಿ ಈಗಲೂ ಕೆಲವೆಡೆಯಲ್ಲಿ ಸೀಗೆಹುಡಿಯು ಪ್ರಯೋಗದಲ್ಲಿದೆ. ಎಂದರೆ ಸೋಪುಗಳು ಪಟ್ಟಣಗಳನ್ನೆಲ್ಲ ಬಯಸಿದರೂ ಹಳ್ಳಿಗಳನ್ನು ಪೂರ್ಣ ಗೆಲ್ಲುವಷ್ಟು ಸಾಹಸಿಗಳಲ್ಲವೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಪಟ್ಟಣಿಗರಿಗೆ ಸೋಪು ಇಲ್ಲದೆ ಗತಿ ಇಲ್ಲ. ಗಡ್ಡಕ್ಕೆ ಬೇಕು. ಹೆಂಗುಸರಿಗೆ ಕೈಕಾಲುಗಳನ್ನು ತೊಳೆಯಲಿಕ್ಕೂ ಸೋಪು ಬೇಕು. ಚಿಕ್ಕ ಮಕ್ಕಳಿಗೂ ಅದೇ ಪಾಠ. ಆದುದರಿಂದ ಸೋಪಿನ ಖರ್ಚಿಗೆ ತುದಿಮೊದಲಿಲ್ಲ. ಬೆಳಗ್ಗಿನ ಜಾವದಿಂದ ರಾತ್ರೆ ನಿದ್ರಿಸುವ ಸಮಯದ ವರೆಗೂ ಸೋಪನ್ನು ಸವೆಸುವುದು ನಮ್ಮೆಲ್ಲರ ಮುಖ್ಯ ಕರ್ತವ್ಯ.

ನೀರನ್ನು ಮಾತ್ರ ಬಿಸಿಮಾಡುವುದಲ್ಲವೆ ಎಣ್ಣೆಯನ್ನೂ ಕಾಯಿಸುವ ಕ್ರಮವಿದೆ. ಆದರೆ ಇದರ ವಿಷಯ ಹೆಚ್ಚು ವಿಸ್ತರಿಸಿದರೆ ಭೂಮಾತೆಗೆ ಎತ್ತು

ಆ ಲೋಕನಾತೆಯು ಭಕ್ತರಿಗೆ ಬೇಸರವಾಗಬಹುದು. ವಾಚಕರಿಗೂ ಈ ಉಪನ್ಯಾಸದ ಬಿಸಿಯು ಹೆಚ್ಚಾಯಿತೆಂದು ತೋರಬಹುದು. ಅದುಕಾರಣ ದೀಪಾವಳಿಯ ಮಂಗಲಸ್ನಾನವನ್ನು ಮಾಡಿ ದಣಿದ ನಮ್ಮ ಲೇಖನಿಗೆ ಒಂದಿಷ್ಟು ವಿರಾಮವಿರಲಿ.

---

## ೩. ದುರಭ್ಯಾಸಗಳು

ದುರಭ್ಯಾಸಗಳನ್ನೆಲ್ಲ ದೂರದಲ್ಲಿರಿಸಬೇಕೆಂಬ ಉಪನ್ಯಾಸಕ್ಕೆ ಕೈ ಹಾಕಲಿಕ್ಕೆ ನಮಗೆ ಮನಸ್ಸಿಲ್ಲ. ಹಾಗೆ ಮಾಡಿದರೆ 'ಮೋರಲ್ ಉಪನ್ಯಾಸ' ವನ್ನು ಬರೆದಂತಾಯಿತು. ಬರೆದುದನ್ನು ಓದುವವರಾರು? ಓದದಿದ್ದರೆ ಬರೆದವನು ಬರೆದಂತಾಗುವುದಿಲ್ಲ. ಮೋರಲ್ ಉಪನ್ಯಾಸವೆಂದ ಕೂಡಲೆ ವಾಚಕರು ಇಡೀ ಪುಟವನ್ನೇ ಹಾರಿ ಮುಂದರಿಸುತ್ತಾರೆ.

ವಾಚಕರು ಕೋಪದಿಂದ ಹಾರುವ ಸಂದರ್ಭವೂ ಇದೆ. ಹಾಗೆ ಹಾರುವುದರಿಂದ ಅವರ ದುರಭ್ಯಾಸಗಳೂ ಹಾರಿಹೋದರೆ ಗುಣವಿದೆ. ಆದರಿದು ಅಸಂಭವ. ನಾವಿಂದು ಎರಡು ಮೂರು ಹೊಸ ದುರಭ್ಯಾಸ ಗಳನ್ನು ಕಂಡುಹಿಡಿದಿರುತ್ತೇವೆ. ಅವುಗಳನ್ನೆತ್ತಿ ನಾಲ್ಕು ಪುಟಗಳನ್ನು ವಿಸ್ತಾರದಂತೆ ಒಂದು ಉಪನ್ಯಾಸವನ್ನು ರಚಿಸಿದರೆ ಪಾಸಾಗಲಿಕ್ಕೆ ಸಾಕಷ್ಟು ಮಾರ್ಕು ನಮಗೆ ವಾಚಕರಿಂದ ದೊರೆಯಬಹುದು.

ಹೊಸ ದುರಭ್ಯಾಸಗಳೆಂದರೆ ತೀರ ಹೊಸತಲ್ಲ. 'ಸೆಂಟ್ ಪರ್ ಸೆಂಟ್' ಹೊಸ ವಿಷಯಗಳು ಯಾವುವೂ ಇಲ್ಲ. ನಮ್ಮ ಲೇಖನಿಗೆ ಹೊಸತಾದುದು ಅಥವಾ ನಾವಿಷ್ಟರವರೆಗೆ ಬರೆಯದೆ ಇದ್ದ ವಿಷಯಗಳು ಹೊಸ ದುರ ಭ್ಯಾಸಗಳು. ಈ ಅಭ್ಯಾಸಗಳೆಲ್ಲ ದೂರದಿಂದಲೇ ಅಭ್ಯಾಸಿಸಲ್ಪಡು ವಂತಹವುಗಳೆಂಬುದನ್ನು ನಾವು ಸ್ಪಷ್ಟಗೊಳಿಸಿದರೆ ಕಟ್ಟಿಕೊಂಡ ಕೆಲಸವು ಮುಗಿಯಿತು.

ದುರಭ್ಯಾಸಗಳನ್ನು ದೂರದಲ್ಲಿಟ್ಟಷ್ಟು ಅವು ದುರಭ್ಯಾಸಗಳ ಪಂಕ್ತಿಗೆ ಸೇರುವುದಿಲ್ಲ; ಆದರೆ, ಹತ್ತಿರಕ್ಕೆ ಬಂದಷ್ಟು ಅವು ದುರಭ್ಯಾಸಗಳಾಗುವುವು.

ಬೀಡಿ ಸಿಗರೆಟ್‌ಗಳನ್ನು ಸೇದುವ ಕ್ರಮವನ್ನು ಪರೀಕ್ಷಿಸುವ. ದೊಡವರಲ್ಲಿ ಇದು ದುರಭ್ಯಾಸವೆಂದಾಗುತ್ತದೆ. ಏಕೆಂದರೆ ಇವರು

ಅವಸರದಿಂದ ಎರಡು ಮೂರು ಇಂಚಿನ ಸಾಧನವನ್ನು ಬಾಯಿಯಲ್ಲಿಟ್ಟು ಕೊಂಡು ಅದರ ಸ್ಪರ್ಶಸುಖವನ್ನು ಅನುಭವಿಸುತ್ತಾರೆ. ಎಂದರೆ ಅದು ಬಾಯಿಗೆ ಬಹು ಹತ್ತಿರವಾಯಿತು. ಆದರೆ ಶಾಲಾ ಕಾಲೇಜು ಯುವಕರ ಕ್ರಮವನ್ನು ನೋಡಿರಿ. ಅವರು ಬೀಡಿಯನ್ನೂ ಸಿಗರೇಟನ್ನೂ ಬಾಯಿಯಿಂದ ಮುಟ್ಟುವುದಿಲ್ಲ. ಎರಡು ಕೈಗಳ ಹತ್ತು ಬೆರಳುಗಳನ್ನು ಒಟ್ಟುಗೂಡಿಸಿ ಅಂಡಾಕಾರವಾದ ಬೆರಳಗೂಡನ್ನು ರಚಿಸಿ, ಆ ಸಿಗರೆಟ್ ಎಂಬ ಗಿಳಿಯನ್ನು ಪಂಜರದ ಹೊರಗಿಟ್ಟು, ಸಿಗರೇಟಿನ ಒಂದೇ ಒಂದಾದ ಕಾಲನ್ನು ಗೂಡಿನಲ್ಲಿ ಸಿಕ್ಕಿಸಿ, ಅದರ ತಲೆಯನ್ನು ಹೊತ್ತಿಸಿ, ಸಿಗರೆಟ್ ಸುಖವನ್ನು ಅನುಭವಿಸುತ್ತಾರೆ. ಸಿಗರೆಟಿನ ತಲೆಯು ಬಾಯಿಂದ ಎಷ್ಟು ದೂರವಿದೆಯೆಂಬುದನ್ನು ನೀವೇ ಅಳತೆಮಾಡಬಹುದು. ಇವರಿಗೆ ದುರಭ್ಯಾಸಗಳನ್ನು ದೂರದಲ್ಲಿಡಬೇಕೆಂಬುದು ಚೆನ್ನಾಗಿ ಗೊತ್ತು. ಆಗ ಈ ಅಭ್ಯಾಸವು ದುರಭ್ಯಾಸಗಳ ಸಾಲಿಗೆ ಸೇರಲಾರದು. ಸೇದುವ ಕೆಲಸವನ್ನಾದರೂ ದೂರದಲ್ಲಿ ಮಾಡುವುದು ಒಳಿತೆಂದು ಗ್ರಹಿಸಿ ರಹಸ್ಯವಾಗಿ ಬೀಡಿ ಸಿಗರೆಟ್ ಸೇದುವವರ ಉದ್ದೇಶವು ಸಹ ಇದೇ ಜಾತಿಯದು. ಆದರೆ ಸೇದುವ ಕ್ರಮವನ್ನೂ ಬದಲಾಯಿಸಿದರೆ ಮತ್ತಷ್ಟು ಒಳ್ಳೆಯದು. ಇದನ್ನಾದರೂ ನಾವು ಯುವಕರಿಂದ ಕಲಿತರೆ ಲೇಸು.

ನಾವು 'ಪಬ್ಲಿಕ್ ಡಿನ್ನರು'ಗಳನ್ನು ಖಾಯಿಸು ಮಾಡುವುದಿಲ್ಲ. ನಮಗಲ್ಲಿಯ ಊಟವು ಸೇರುವುದಿಲ್ಲ. ಏಕೆಂದರೆ ಅಲ್ಲಿ ನಮ್ಮ ಸಾಲಿಗೆ ಸೇರುವ ಜನರಲ್ಲಿ ಒಂದು ದುರಭ್ಯಾಸವು ಕಂಡುಬರುತ್ತದೆ. ಅದಾವುದೆಂದರೆ ತಿನ್ನುವಾಗ ಬಾಯಿಯಿಂದ ಮಾಡುವ ಶಬ್ದ. ಮನೆಯಲ್ಲಿ ಹೆಂಗಸರು ತೆಂಗಿನಕಾಯಿ, ಮೆಣಸು ಇತ್ಯಾದಿ ಸಾಧನಗಳನ್ನು ಅರೆಯುವ ಕಲ್ಲಿನಲ್ಲಿ ಹಾಕಿ ಮಸಾಲೆಯನ್ನು ಅರೆಯುವಾಗ ಉಂಟಾಗುವ ಶಬ್ದವನ್ನು ನೀವು ಕೇಳಿರಬಹುದು. ಇಲ್ಲವಾದರೆ ಒಂದು ದಿನ ಪುರುಸತ್ತು ಮಾಡಿ ಅದನ್ನು ಕೇಳಿಬಿಡಿ. ಜನರು ಊಟಮಾಡುವ ಶಬ್ದವೂ ಅಧಿಕಾಂಶ ಈ ಅರೆಯುವ ಕಲ್ಲಿನ ಶಬ್ದವನ್ನು ಹೋಲುವುದು. ಪಬ್ಲಿಕ್ ಡಿನ್ನರ್ಸ್ ಸಮಯದಲ್ಲಿ ಇಂತಹ ಶಬ್ದಗಳನ್ನು ಇಕ್ಕಡೆಯಲ್ಲಿಯೂ ಕೇಳಿದರೆ, ಮತ್ತೆ ಒಂದು ತುತ್ತು ಕೂಡ ನಮ್ಮ ಬಾಯಿಯನ್ನು ಸೇರಲಿಕ್ಕಿಲ್ಲ; ಆದುದರಿಂದ ಡಿನ್ನರ್ಸ್ ನಮಗೆ ಹಿಡಿಯುವುದಿಲ್ಲ.

ನಡುವೆ ಇನ್ನೊಂದು ದುರಭ್ಯಾಸವೂ ಇದೆ. ಅದು ಯಾವುದೆಂದರೆ ಮೂಗನ್ನು ಸಡಿಲಿಸುವುದು. ಡಿನ್ನರುಗಳು ಪ್ರಾರಂಭವಾಗುವ ಮೊದಲೇ ಮೂಗನ್ನು ಸಡಿಲಿಸುವ ಕೆಲಸವನ್ನು ಒಮ್ಮೆ ಚೆನ್ನಾಗಿಮಾಡಿ ತೀರಿಸಿಬಿಟ್ಟರೆ ಮತ್ತೆ ನುಂಗುವ ಕೆಲಸಕ್ಕೆ ಅಡ್ಡಿ ಬರುವುದಿಲ್ಲ. ಈ ಕೆಲಸವನ್ನು ಆದಷ್ಟು ದೂರದಲ್ಲಿ ಮಾಡಿದರೆ, ಅದು ದುರಭ್ಯಾಸವೆಂದಾಗದು. ಇದಕ್ಕೆ ವಿರೋಧ ವಾಗಿ ಈ ಮೂಗಿನ ಸಿಡಿಲುಗಳಿಂದ ಉಂಟಾಗುವ ಶಬ್ದಗಳು ಕೇಳಿಬಂದರೆ ಡಿನ್ನರಿನ ಪ್ರಯೋಜನವು ಜನರಿಗಾಗದು.

ಡಿನ್ನರು ಅಂತ್ಯವಾಯಿತೆಂದು ಸೂಚಿಸುವ ಕದನಿಗಳ ವಿಷಯ ನಾವಿಲ್ಲಿ ಬರೆಯಬಾರದು. ಅದು ಸಹ ದುರಭ್ಯಾಸ. ದೂರದಲ್ಲಿದರೆ ಅಭ್ಯಾಸವಾದರೆ ಜನರಿಗೇನೂ ತೊಂದರೆಯಿಲ್ಲ. ಡಿನ್ನರುಗಳಿಂದ ಮುಖ್ಯ ವಾದ ಲಾಭವಾವುದೆಂದರೆ—ಸೇದುವವರಿಗೆಲ್ಲ ಹಲವು ಸಿಗರೆಟುಗಳು. ಬಾಯಿಗೆ ಸಾಕಷ್ಟು ಆಯಾಸವಾಗದವರಿಗೆ ಹಲವು ಬೀಡಾಗಳು.

ಸೆಕೆಕಾಲದಲ್ಲಿ ಮಾರ್ಗಗಳಲ್ಲಿ ಏಳುವ ಧೂಳನ್ನು ಕೆಳಗಿಳಿಸಲಿಕ್ಕೆ ನೀರಿನ ಸರಬರಾಯಿಯು ಎಲ್ಲಾ ಪಟ್ಟಣಗಳಲ್ಲಿ ಇದೆ. ನಮ್ಮ ಸಿಟಿ ಯಲ್ಲಿಯೂ ಈ ಕ್ರಮವಿದೆ ಅಗಲವಾದ ಬೀದಿಗಳಲ್ಲೆಲ್ಲಾ ಒಂದೆರಡು ಲೋರಿಗಳು ನೀರನ್ನು ಸುರಿಸುತ್ತ ಅತ್ತಿತ್ತ ಓಡಾಡುತ್ತಿರುವುವು. ಆದರೆ ಈ ಲೋರಿಗಳಿಗೆ ನಮ್ಮ ಹಲವು ಓಣಿಗಳ ಪರಿಚಯವಿಲ್ಲ. ಯಾವಾಗಲೂ ಓಣಿಗಳಲ್ಲಿ ಸಂಚರಿಸುವ ಜನರು ಹಲವರು. ಅಂದರೆ ವಿಶೇಷ ಕೆಲಸವಿದೆ ಯೆಂದಲ್ಲ. ಓಣಿಗಳಿಗೂ ಬೇಸಗೆಯ ಕಾಲದಲ್ಲಿ ಬಾಯಾರಲಿಕ್ಕಿಲ್ಲವೆ? ಈ ಬಾಯಾರಿಕೆಯನ್ನು ಹೇಗೆ ಸಮಾಧಾನಪಡಿಸುವುದು ಎಂಬ ಸಮಸ್ಯೆ ಯನ್ನು ಇವರು ಬಿಚ್ಚುವಂಥವರು.

ಮತ್ತೊಂದು ದೊಡ್ಡ ದುರಭ್ಯಾಸವಾವುದೆಂದರೆ ಪ್ರತಿಯೊಂದು ಕೆಲಸದಲ್ಲಿಯೂ ದೊಡ್ಡ ಗಾಜಿಯನ್ನೆಬ್ಬಿಸುವುದು; ಚಿಲ್ಲರೆ ಕೆಲಸಗಳಲ್ಲಿಯೂ ಹಾಗೆಯೆ ಶಬ್ದಘೋಷ. ಇದು ಏಕೆ? ನಮ್ಮದು ಶಬ್ದದ ಯುಗ. ಬೊಬ್ಬೆಯೆಂದು ಬರೆಯಲಿಕ್ಕೆ ಪೆನ್ನು ಹಿಂಜರಿಯುತ್ತದೆ. ಒಂದು ಸಣ್ಣ ಪಾತ್ರೆಯನ್ನು ಒಂದು ಕಡೆಯಿಂದ ಎತ್ತಿ ಇನ್ನೊಂದು ಸ್ಥಳದಲ್ಲಿ ಅದನ್ನು ಇಡುವಾಗ 'ಡಮ್' ಎಂಬ ಶಬ್ದ. ಕಿಟಿಕಿಯ ಬಾಗಿಲುಗಳನ್ನು ಮುಚ್ಚು ವಾಗ ಇನ್ನೊಂದು 'ಗನ್‌ಫಾಯರ್.' ಬಾಗಿಲುಗಳನ್ನು ಮುಚ್ಚುವಾಗಲೂ

ಅದೇ ತೆರನಾದ ನಾದ. ಮಾತಾಡುವಾಗ ಮಾತುಗಳಲ್ಲ; ದೊಡ್ಡ 'ಕದನಿ' ಗಳೇ ಹೊರಬರುವಂಥವುಗಳು. ನಡೆಯುವಾಗಲೂ ತಟಪಟ ಶಬ್ದ. ಯಾವ ಕಡೆಯಲ್ಲಿ ಕಿವಿಯೆತ್ತಿದರೂ ಮಕ್ಕಳ ಬೊಬ್ಬೆ ಮತ್ತು ಗದ್ದಲ. ಹೀಗಾಗಿ ಕಿವಿಗಳಲ್ಲಿ ಸಾಧಾರಣ ಯಾವ ಶಬ್ದಗಳೂ ಒಳ ಹೋಗುವುದಿಲ್ಲ. ಇದರಿಂದ ಒಂದು ಲಾಭವಿದೆ.

ನಾವು ಕ್ಲಾಸಿನಲ್ಲಿ ಕೂತುಕೊಂಡು ತಲೆಸಿಡಿತದ ಭಾರದಿಂದ ಒಂದು ಮಾತನ್ನು ಕೂಡ ಎತ್ತಲಾರದಿದ್ದರೆ, ಕ್ಲಾಸಿನ ಹುಡುಗರೆಲ್ಲ ಒಟ್ಟುಗೂಡಿ ಕೆಲಸ ನಡೆಯುತ್ತಾ ಇದೆಯೆಂಬುದನ್ನು ವ್ಯಕ್ತಪಡಿಸಲಿಕ್ಕೆ ಸಾಕಷ್ಟು ಗೌಜಿಯನ್ನು ಸ್ವತಃ ಮಾಡುವರು ಇದು ದೂರದಲ್ಲಾಗುವುದರಿಂದ, ದುರಭ್ಯಾಸವಲ್ಲ.

---

## ೪. ತಲೆ ಕೆಳಗೆ ಕಾಲು ಮೇಲೆ

ಮನೆಯಲ್ಲಿ ಹೊಸತಾಗಿ ಬಂದ ಛತ್ತದ ತೆನೆಗಳೂ, ಮೂಲೆಯಲ್ಲಿ ರಾಶಿಬಿದ್ದ ಕೊಡೆಗಳೂ, ರಾತ್ರಿಯಲ್ಲಿ ಪ್ರಕಾಶವನ್ನು ಕೊಡುವ ಇಲೆಕ್ಟ್ರಿಕ್ ಲೈಟುಗಳೂ ತಲೆಕೆಳಗೆ ಕಾಲು ಮೇಲೆ ಮಾಡಿದುದನ್ನು ನೋಡಿ ಇದ ರಲ್ಲೇನೂ ವಿಶೇಷವಾದ ಸತ್ಯವಿರಬೇಕೆಂದು ಎಣಿಸಿ, ಆ ಸತ್ಯವನ್ನು ಬಯಲಿ ಗೆಳೆಯಬೇಕೆಂದು ನಿರ್ಧರಿಸಿದೆವು. ಕಾರಣವೇನೆಂದರೆ— ಬರೆಯಬೇಕೆಂದು ಅತ್ತಿತ್ತ ನೋಡುತ್ತಿದ್ದಾಗ ಬೇರೆ ಯಾವ ವಸ್ತುವೂ ಇಂದು ನಮ್ಮ ದೃಷ್ಟಿಗೆ ಬೀಳದೆ ಇದ್ದುದೇ.

ನಾವು ಬರೆಯುವ ಲೇಖನಿಗೂ ಇದೇ ಅಭ್ಯಾಸ. ಅದು ಬರೆಯು ವುದು ತಲೆಯಿಂದಲೇ. ಅದಕ್ಕೆ ಇರುವುದು ಕಾಲೊಂದೇಯಾದರೂ, ಆ ಕಾಲು ಯಾವಾಗಲೂ ಇರುವುದು ಮೇಲೆ, ಆದುದರಿಂದ ನಮ್ಮ ಲೇಖನಿಗೆ ಈ ಪ್ರಬಂಧವನ್ನು ಬರೆಯುವುದು ಕಷ್ಟದ ಕೆಲಸವಲ್ಲ. ಲೇಖನಿಗೆ ತಲೆಯು ಸಂಪೂರ್ಣ ಸಹಾಯವಿದೆ. ತಲೆಕೆಳಗೆ ಕಾಲುಮೇಲೆ ಮಾಡುವುದರ ಕೂಟಕ್ಕೆ ನಮ್ಮ ಲೇಖನಿಯೂ ಸೇರಿಯೇ ಇದೆ.

"ಸತ್ಯವೆಂಬುದು ಅಗಾಧವಾದ ಬಾವಿಯಲ್ಲಿ ಅಡಗಿರುವಂತಹದು. ನಮ್ಮಂತಹ ಬಡ ಪ್ರಾಣಿಗಳಿಗೆ ಕಣ್ಣುಗಳಿದ್ದರೂ ನೋಡಲಿಕ್ಕೆ ಸಿಗುವ

ವಸ್ತುವಲ್ಲ" ಎಂದು ಒಬ್ಬ ಮಹಾನುಭಾವರು ನಮಗೆ ಹೇಳಿಕೊಟ್ಟಿದ್ದರೂ, ನಮಗಾ ಹೇಳಿಕೆಯಲ್ಲಿ ಸಂಪೂರ್ಣ ನಂಬಿಗೆಯಿಲ್ಲವೆಂದೇ ಇಲ್ಲಿ ಹೇಳುತ್ತೇನೆ. ನಮ್ಮ ಕಣ್ಣೆದಿರಿನಲ್ಲಿ ಕಂಡುಬರುವ ವಸ್ತುಗಳಲ್ಲೆಲ್ಲ ಸತ್ಯವಿದೆ. ನಿಜವಿದೆಯೆಂದು ತಾವು ನಂಬುವುದರಲ್ಲಿ ತಪ್ಪಿಲ್ಲ. ಆದುದರಿಂದ ತಲೆಕೆಳಗೆ ಕಾಲುಮೇಲೆ ಮಾಡುವ ವಸ್ತುಗಳಲ್ಲೆಲ್ಲ ಒಂದು ಸತ್ಯವಿದೆ. ಅದಾವುದೆಂದು ಸ್ವಲ್ಪ ವೆಚ್ಚಮಾಡಿ ಫಲಿತಾಂಶವನ್ನು ವಾಚಕರ ಮುಂದಿಡುವುದು ನಮ್ಮ ಈಗಿನ ಕರ್ತವ್ಯವೆಂದೆಣಿಸಿ, ಆ ವಸ್ತುಗಳನ್ನೆಲ್ಲಾ ಸಾಲುಸಾಲಾಗಿ ವಾಚಕರೆದಿರಿನಲ್ಲಿ ಎಳೆದುತರುತ್ತೇವೆ. ಅವುಗಳನ್ನೇ ವಿಚಾರಿಸಿ ಕಾರಣವನ್ನು ತಿಳಿದುಕೊಳ್ಳುವ.

ಯಾವುದಾದರೂ ಒಂದು ವಸ್ತುವು ಅನಿರೀಕ್ಷಿತವಾದ ಕೆಲಸವನ್ನು ಮಾಡುವಾಗ, ನೋಡುವವರಲ್ಲಿ ಆಶ್ಚರ್ಯವೂ ಸಂತೋಷವೂ ಸಮ್ಮಿಳಿತವಾಗುವುವು. ಚಿಕ್ಕ ಮಕ್ಕಳಿಗೆ ಇಂತಹ ಸಂತೋಷವನ್ನು ಹುಟ್ಟಿಸಲಿಕ್ಕೆಂದು ನಿರ್ಮಿಸಲ್ಪಟ್ಟ ಸಾಧನವೊಂದಿದೆ. ಅದಾವುದೆಂದರೆ ಎಷ್ಟು ಸಲ ಮಲಗಿಸಿದರೂ ಎದ್ದು ಕುಳಿತುಕೊಳ್ಳುವ ಗೊಂಬೆ. ಮಕ್ಕಳಿಗೆ ಅದನ್ನು ಮಲಗಿಸುವುದೇ ಕೆಲಸ. ಆ ಗೊಂಬೆಗೆ ಮರುಕ್ಷಣದಲ್ಲಿ ಏಳುವುದೇ ಕೆಲಸ. ಇದರಲ್ಲಿ ಸತ್ಯವಿಲ್ಲವೆ? ಇದೆ. ಆದರೆ ಚಿಕ್ಕ ಮಕ್ಕಳಿಗದೊಂದು ಆಶ್ಚರ್ಯದ ಸಂಗತಿ. ದೊಡ್ಡವರಿಗೆ ಅದರ ನಿಜಸ್ಥಿತಿ ಗೊತ್ತಿದೆ. ಆದುದರಿಂದ ಆಶ್ಚರ್ಯವು ಕಮ್ಮಿ. ಗೊಂಬೆಯು ಪೃಷ್ಠಭಾಗವು ಸೀಸದಿಂದ ತುಂಬಲ್ಪಟ್ಟಿರುವುದರಿಂದ, ಅದರ ದೇಹದ ಬೇರೆ ಅಂಗಗಳೆಲ್ಲ ಹಗುರವಾಗಿರುವುದರಿಂದ ಅದಕ್ಕೆ ಎದ್ದೇಳದೆ ನಿರ್ವಾಹವಿಲ್ಲ. ಈ ಗೊಂಬೆಯು ಸುದ್ದಿ ಇಲ್ಲೇಕೆಂದು ವಾಚಕರು ಕೇಳಿದರೆ, ಅದು ತಲೆಕೆಳಗೆ ಕಾಲುಮೇಲೆ ಮಾಡುವವರಲ್ಲಿ ಪ್ರಥಮಸ್ಥಾನವನ್ನು ಪಡೆದಿರುವಂತಹದು. ಅದರ ಸಹಜವಾದ ಸ್ಥಿತಿಯು ತಲೆಕೆಳಗಾಗಿಯೇ ಇರಬೇಕು. ನಿರ್ಜೀವ ವಸ್ತುವಾದುದರಿಂದ ನಾವು ತಲೆಕೆಳಗಾಗಿ ಅದನ್ನು ಮಲಗಿಸಿದರೆ ಅದು ಹಾಗೆಯೆ ಬಿದ್ದಿರಬೇಕು. ಅದು ಹಾಗೆ ಮಾಡುವುದಿಲ್ಲ. ತಲೆಯನ್ನು ಕೂಡಲೇ ಮೇಲಕ್ಕೆ ಎತ್ತುತ್ತದೆ. ಯಾವುದರ ಬಲದಿಂದ? ಸೀಸದ ಬಲದಿಂದ. ಜನರಲ್ಲಿ ಸಹ ಸೀಸ (ಬಾಟ್ಲೆ) ದ ಅಥವಾ ಸೀಸೆಯ ಬಲದಿಂದಲೇ ತಲೆಯೆತ್ತುವವರು ಎಷ್ಟಿಲ್ಲ? ಅದಿಲ್ಲದಿದ್ದರೆ ಎಂತಹ ನಿರ್ಜೀವಿಗಳಂತೆ ಅವರು ಕಾಣಿಸಿಕೊಳ್ಳುವುದಿಲ್ಲ! ನಿಜ

ವಾಗಿ ಆಲೋಚಿಸಿ ನೋಡಿದರೆ ಇದೊಂದು 'ತಲೆಕೆಳಗೆ ಕಾಲುಮೇಲೆ'ಂಬ ಜೀವನಕ್ರಮದಲ್ಲಿ ಮೊದಲನೆಯ ಗೊಂಬೆ ಅಥವಾ ದೃಶ್ಯ.

ಬಾಟ್ಲಿಯು ಬಾಯಿಗೆ ಬರುವಾಗ ಹೇಗೆ ತಲೆಕೆಳಗೆ ಮಾಡಿ ಕಾಲನ್ನು ಮೇಲೆ ಮಾಡುವುದೋ ಹಾಗೆಯೇ ನಮ್ಮ ಬೀಡಿ. ಅಂಗಡಿಗಳಲ್ಲಿ ಕೂಟ ಸೇರಿ ಒಕ್ಕಟ್ಟಿನಲ್ಲಿ (ಒಂದೇ ಕಟ್ಟಿನಲ್ಲಿ) ಇರುವಾಗಲೂ, ಬಂಧನಮುಕ್ತ ವಾಗಿ ಒಂದೊಂದಾಗಿ ಬಾಯಿಗೆ ಬರುವಾಗಲೂ, ಅವುಗಳು ತಲೆಕೆಳಗೆ ಕಾಲುಮೇಲೆ ಮಾಡುವವುಗಳೇ. ಜನರು ಅದರ ತಲೆಯು ಬಹಳ ಬಿಸಿ ಯಾಗಿರುವುದರಿಂದ ಅದರ ಕಾಲನ್ನು ಮೇಲೆಮಾಡಿ ಅದನ್ನು ಬಾಯಲ್ಲಿಟ್ಟು ಕೊಳ್ಳುತ್ತಾರೆ.

ಇನ್ನು ಬ್ಯಾಸಿಕಲ್ಲಿನ ಕಡೆಗೆ ನಮ್ಮ ದೃಷ್ಟಿಯನ್ನು ತಿರುಗಿಸಿದರೆ, ಅದ ರಲ್ಲಿಯೂ ಇದೇ ಕ್ರಮವು ತೋರಿಬರುತ್ತದೆ. ಜನರಿಗೆ ಕಾಲುಗಳಿಗೆ ಬದ ಲಾಗಿ ತಯಾರಿಸಲ್ಪಟ್ಟ ಸಾಧನವಿದು, ಒಂದು ಬಗೆಯಲ್ಲಿ ಅದು ಜನರ ಕಾಲು ಎಂದರೆ ತಪ್ಪಾಗದು. ಇದು ಸರಿಯಾದ ಮಾರ್ಗವಿರುವಷ್ಟು ದೂರಕ್ಕೆ ಮನುಷ್ಯನನ್ನು ಎತ್ತಿಕೊಂಡು ಹೋಗುತ್ತದೆ. ಆದರೆ ಹೊಂಡ ಗಳು, ಪಾವುಗಳು (ಪುಟ್ಟ ಸಂಕಗಳು) ಬರುವಾಗ ಆ ಹೊಂಡಗಳ ಆಳ ವನ್ನು ನೋಡಿಯೋ ಏನೋ, ಸ್ಯಾಕಲಿಗೆ ಸಂಕಟ ಹಿಡಿಯುತ್ತದೆ. ಆಗ ಆ ಬಡಪ್ರಾಣಿಯನ್ನು (ಎಂದರೆ ಆ ಕಾಲನ್ನು) ಮೇಲಕ್ಕೆ ಎತ್ತದೆ ನಿರ್ವಾಹ ವಿಲ್ಲ. ಆಗ ಮನುಷ್ಯನ ತಲೆ ಆ ಕಾಲಿನ ಕೆಳಗೆ ನಿಜವಾಗಿಯೂ 'ಸಾಯ್ಕಾಲ್' ಎಂದರೆ ಸಹಾಯಕವಾದ ಕಾಲೆಂತಲೇ ಅರ್ಥ.

ದಾರಿಯಲ್ಲಿ ನಡೆಯುವ ಜನರನ್ನು ಪರೀಕ್ಷಿಸಿ ನೋಡಿರಿ. ಶೂಸ್ ಧಾರಿಗಳಾದವರಿಗೆ ತಲೆಕೆಳಗೆ ಎಲ್ಲಿ? ಕಾಲ್ಮೇಲೆ ಏಕೆ? ಪಾದಗಳನ್ನಲಂಕರಿ ಸುವ ಜಗಿಜಗಿಸುವ ಶೂಸಿನ ಸೌಂದರ್ಯವನ್ನು ನೋಡಿ ಸುಖಪಡುವು ದಕ್ಕೆ ಮತ್ತು ಅದರ ತಟಪಟ ಎಂಬ ಗಾನವನ್ನಾಲಿಸಲಿಕ್ಕೆ. ಅತ್ತಿತ್ತ, ಇದಿರಿನಲ್ಲಿ, ಬದಿಯಲ್ಲಿ ಯಾರು ಬರುತ್ತಾರೆ ಎಂಬುದಕ್ಕೆ ಅವರ ಗಮನ ವಿಲ್ಲ. ಕಾಲಿನಷ್ಟು ಶ್ರೇಷ್ಠವಾದ ಬೇರೆ ಯಾವ ವಿಷಯವೂ ಜಗತ್ತಿನಲ್ಲಿಲ್ಲ ವೆಂದೇ ಅವರ ಭಾವನೆ. ಆದುದರಿಂದ ಜನರಲ್ಲನೇಕರಿಗೆ ತಲೆಕೆಳಗೆ ಕಾಲ್ಮೇಲೆ ಎಂದು ಏಕೆ ಹೇಳಬಾರದು? ಜಾತಕವನ್ನು ನೋಡುವವರು

(ಕವರಿನ 2ನೇ ಪುಟಕ್ಕೆ ಮುಂದುವರಿದದೆ)

# ಉಳಿತಾಯದಿಂದ ಶ್ರೀಮಂತರಾಗಿರಿ!

## ಕೆನರಾ ಬ್ಯಾಂಕಿನ

## 3 ವರ್ಷಗಳ

ಮತ್ತು

## 5 ವರ್ಷಗಳ

ಕ್ಯಾಶ್ ಸರ್ಟಿಫಿಕೇಟ್‌ಗಳಲ್ಲಿ ನಿಮ್ಮ ಉಳಿತಾಯವನ್ನು

ವಿನಿಯೋಗಿಸಿ

**ಹೆಚ್ಚು ಬಡ್ಡಿ ಸಂಪಾದಿಸಿರಿ.**

81/= ರೂ.ಗಳು 5 ವರ್ಷಗಳಲ್ಲಿ 100 ರೂ.ಗಳಾಗುತ್ತವೆ.

88.75/= ರೂ.ಗಳು 3 ವರ್ಷಗಳಲ್ಲಿ 100 ರೂ.ಗಳಾಗುತ್ತವೆ.

: ವಿವರಗಳಿಗೆ :

# ಕೆನರಾ ಬ್ಯಾಂಕ್ ಲಿಮಿಟೆಡ್

(ಸ್ಥಾಪನೆ: 1906)

(ಮೈಸೂರು ಸಂಸ್ಥಾನದಲ್ಲಿ ಸ್ಥಾಪಿತವಾಗಿರುವ ಷೆಡ್ಯೂಲ್ಡ್ ಬ್ಯಾಂಕುಗಳಲ್ಲೆಲ್ಲಾ ಅತ್ಯಂತ ದೊಡ್ಡದು.)

Edited, Printed & Published by K. V. Shenoy
at The Prabhat Printers, Ltd., Mangalore.